WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಡಿಸೆಂಬರ್ ೨೨, ೨೦೧೧ (ಪುಷ್ಯ ೧, ಶಕ ವರ್ಷ ೧೯೩೩) | ಸಂಚಿಕೆ ೫೦ |
| --- | --- | --- |

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### REVENUE DEPARTMENT

**CORRIGENDUM**

**RD 366 BMM 2008, Bangalore, Dated 29th July 2011**

The date of birth of Smt. K. Ratna (Seniority No. 6053) Sheristedar, Mysore Division, shall be corrected and read as 10-08-1958 instead of 10-08-1950 in the consolidated State-wise gradation list of Sherestedar published in Notification No. RD 366 BMM 2008, dated 14-07-2011, and the remarks "retd" appearing in the remarks column shall be omitted.

By order and in the name of the Governor of Karnataka,

**Geetha Ramesh,**

Joint Secretary to Government,

Revenue Department (Land Grants & Services)

PR-772

### ಜಿಲ್ಲಾಧಿಕಾರಿಯವರ ಕಾರ್ಯಾಲಯ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

**ಸಂಖ್ಯೆ : ಆಶ್ರಯ.ಸಿಆರ್.–55/2010–11, ದಿನಾಂಕ : 26ನೇ ಜುಲೈ 2011**

**ನಮೂನೆ –27**

**ಅಧಿಸೂಚನೆ**

**ವಿಷಯ:** ಚಿಕ್ಕಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿ, ಕಳವಾರ ಗ್ರಾಮದ ಸ.ನಂ. 55ರ 0–21 ಗುಂಟೆ ಪೈಕಿ 0–13 ಗುಂಟೆ ಜಮೀನನ್ನು ಕಳವಾರ ಗ್ರಾಮದ ನಿವೇಶನ ರಹಿತರಿಗೆ ನಿವೇಶನ ಹಂಚಲು ಮುದ್ದೇನಹಳ್ಳಿ ಗ್ರಾಮ ಪಂಚಾಯತಿಗೆ ವರ್ಗಾವಣೆ ಮಾಡುವ ವಿಚಾರದಲ್ಲಿ ಸಾರ್ವಜನಿಕ ಹಕ್ಕನ್ನು ನಿವೃತ್ತಿಗೊಳಿಸಿ, ಸದರಿ ಶೀರ್ಷಿಕೆಯಿಂದ ತಗ್ಗಿಸಿ ಮುಂದಿನ ಕ್ರಮ ಕೈಗೊಳ್ಳುವ ವಿಚಾರ

**ಉಲ್ಲೇಖ:**

1. ಸರ್ಕಾರದ ಪತ್ರ ಸಂಖ್ಯೆ : ಆರ್.ಡಿ. 41 ಎಲ್‌ಜಿಕೆ 2011, ದಿನಾಂಕ : 18–05–2011.
2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿಸಿಆರ್ 202/2010–11, ದಿನಾಂಕ:08–06–2011.

3. ಅಸಿಸ್ಟೆಂಟ್ ಕಮೀಷನರ್, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಇವರ ವರದಿ ಸಂಖ್ಯೆ : ಆಶ್ರಯ/ಸಿಆರ್ 42/2010–11, ದಿನಾಂಕ 24–01–2011
4. ತಹಸೀಲ್ದಾರ್, ಚಿಕ್ಕಬಳ್ಳಾಪುರ ತಾಲ್ಲೂಕು ರವರ ವರದಿ ಸಂಖ್ಯೆ : ಆಶ್ರಯ ಸಿಆರ್ 66/2011, ದಿನಾಂಕ : 17–01–2011

**94ನೇ ನಿಯಮದ 68(1) ಪ್ರಕರಣದ ಮೇರೆಗಿನ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಲಾದ "ಕಣಗಳು" ಪ್ರದೇಶದ ಜಮೀನು ಸಾರ್ವಜನಿಕ ಉಪಯೋಗಕ್ಕೆ ಸದರಿ ಉದ್ದೇಶಕ್ಕೆ ಅಗತ್ಯವಿಲ್ಲವೆಂದು ಕಂಡು ಬಂದಿರುವುದರಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ 68ನೇ ಪ್ರಕರಣದ (1)ನೇ ಉಪ ಪ್ರಕರಣದಂತೆ ರಾಜ್ಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ "ಕಣಗಳು" ಪ್ರದೇಶವು ಸದರಿ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಸದರಿ "ಕಣಗಳು" ಪ್ರದೇಶದ ಜಮೀನಿನ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸದರಿ "ಕಣಗಳು" ಪ್ರದೇಶದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೊಳಗಾಗುವ ಸಂಭವವಿರುವ ಇತರ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವನೇ ಸಾರ್ವಜನಿಕನು ಅಥವಾ ಯಾವನೇ ವ್ಯಕ್ತಿಯು ಈ ಜಮೀನನ್ನು ಸರ್ಕಾರದ ಇತರೇ ಉದ್ದೇಶಕ್ಕೆ ಪಡೆದುಕೊಳ್ಳುತ್ತಿರುವುದರಿಂದ ಈ ಅಧಿಸೂಚನೆಯನ್ನು ಹೊರಡಿಸಿದ ತೊಂಬತ್ತು ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೈಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದ್ದು ಮತ್ತು ಆಕ್ಷೇಪಣೆಗಳನ್ನು ಮತ್ತು ಕ್ಲೈಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಪರಿಶೀಲಿಸಲಾಗುವುದು.

**ಅನುಸೂಚಿ**

ಜಿಲ್ಲೆ : ಚಿಕ್ಕಬಳ್ಳಾಪುರ
ತಾಲ್ಲೂಕು : ಚಿಕ್ಕಬಳ್ಳಾಪುರ
ಹೋಬಳಿ : ಕಸಬಾ
ಗ್ರಾಮ : ಕಳವಾರ

ಸರ್ವೆ ನಂಬರು 55ರಲ್ಲಿ 0–21 ಗುಂಟೆ ಪೈಕಿ 0–13 ಗುಂಟೆ ಪ್ರದೇಶವನ್ನು ನಿವೇಶನ ರಹಿತರಿಗೆ ನಿವೇಶನ ಹಂಚುವ ಸಲುವಾಗಿ ಮುದ್ದೇನಹಳ್ಳಿ ಗ್ರಾಮಪಂಚಾಯತಿಗೆ ವರ್ಗಾವಣೆ ಮಾಡುವ ಸಲುವಾಗಿ ಸಾರ್ವಜನಿಕರ ಹಕ್ಕು ನಿವೃತ್ತಿಗಾಗಿ ಪ್ರಸ್ತಾಪಿಸಲಾಗಿದೆ.

**ಚೆಕ್ಕುಬಂದಿ :**

ಪೂರ್ವಕ್ಕೆ : ಲಾಗು ಸ.ನಂ.3 ರ ಜಮೀನು
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ಗ್ರಾಮಠಾಣಾ
ದಕ್ಷಿಣಕ್ಕೆ : ಸ.ನಂ.54 ರ ಜಮೀನು

ಜಿಲ್ಲಾಧಿಕಾರಿ,
ಚಿಕ್ಕಬಳ್ಳಾಪುರ ಜಿಲ್ಲೆ

ಪಿ.ಆರ್. 774

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT,2003

**Sub :** KVAT Act, 2003 – Clarification under Section 59(4) regarding the rate of tax applicable on 'domestic cylinders-reg.,

**Ref :** Application dated 23.04.2011 of Sri Manoj V.Chhapia, Managing Director, Kwality Gas Bottlers Private Limited, D-41, Rajajinagar Industrial Estate, Bangalore-560 044. TIN :29500781653.

***

The registered dealer under the Act, Kwality Gas Bottlers Private Limited Bangalore, has sought clarification regarding the rate of tax applicable on 'domestic cylinders' .

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.40/11-12, DATED 28.07.2011**

It is hereby clarified that 'liquefied petroleum gas cylinders' of 12 Kg capacity meant for domestic use are taxable @ 1 % V AT in terms of the notification No.FD 148 CSL 2008 (II),dated: 19-06-2008 and liquefied petroleum gas cylinders of 4 kg, 5.5.kg and 15 kg capacity are taxable at 14% under Section 4(1)(b) of the KVAT Act, 2003.

PR-778

**PRADEEP SINGH KHAROLA,**
Commissioner of Commercial Taxes
(Karnataka), Bangalore

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT,2003

**Sub:** KVAT Act, 2003 - Clarification under Section 59(4) regarding the rate of tax applicable on 'scooter belts-reg.,

**Ref:** Application dated:Nil of Jain Auto Centre, #21/1, Shop No.3, HKS Complex, 3rd Cross, Journalist Colony, J.C.Road, Bangalore-560 002. TIN:29480076960.

The registered dealer under the Act, Jain Auto Centre, Bangalore, has sought clarification regarding the rate of tax applicable on scooter belts.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provison and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.34/11-12, DATED 28.07.2011**

It is clarified that 'scooter belts' are liable to tax at 14% under Section 4(1) (b) of the Karnataka Value Added Tax Act, 2003.

**PRADEEP SINGH KHAROLA,**
Commissioner of Commercial Taxes
(Karnataka), Bangalore

PR-779

## IN THE AUTHORISED OFFICER AND DEPUTY COMMISSIONER OF EXCISE BIJAPUR DISTRICT, SHIKARKHANA, STATION BACK ROAD, BIJAPUR

**NO:EXE/BJP/DTCR/131/2008-09. Bijapur: 25-07-2011**

It has been reported to this authority that a Lorry bearing No:PB-l 0-060 1 was illegally transporting 924 cases (each case contains 48 Bottles of 180ML) of Superman Fine Whisky. Accordingly the Sub-Inspector of Excise State EIB Bangalore inspected the above said lorry and found that there is no valid permit or any other documents pertaining to the above said goods the officer

registered a case vide Crime No:26/2008-09 under section 32, 34, 38(A) & 43 of the Karnataka Excise Act 1965 for illegal transportation and seized 48 X 180ml X 924 boxes Superman Fine Whisky in lorry bearing registration No: PB-10-0601 on 20-12-2008 at 9-00 -0601 National Highway-13, Managoli Cross of Basavan Bagewadi Taluka.

As per the be-extract which is given by Jodhpur regional transport officer you are owner of the above said vehicle ie. Sri. Amarjeetsingh, Gurumejsingh, No: 175, Mechanic Nagar, Indore. Or No: 175, Nera Gurudhawar, Pimpliyarao, Mouh, Indore Madhya Pradesh State hence you have been issued a notice through Register A.D. Post. And the same is received by you personally, even though you have not attended before this court.

There fore this is the final notice to you or your representative to appear before this authority within 15 days from the date of publishing in "Karnataka Gazette". Failing which will be presumed that you have nothing to say in the matter. Further action will be taken as per Karnataka Excise Rules on the basis of records available in this office without intimating you.

Authorised Officer and
Deputy Commissioner of Excise
Bijapur District, Bijapur.

PR-784

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ. ಇವರ ನ್ಯಾಯಾಲಯದಲ್ಲಿ.

**ಸಂಖ್ಯೆ: ಕಾಅಗ/ಕಾನಪ/ಎಫ್–38/2011/312, ದಿನಾಂಕ: 1ನೇ ಆಗಸ್ಟ್ 2011.**

**ಅರ್ಜಿದಾರರು:**

1. ಶ್ರೀಮತಿ ರೇಣುಕಾ @ ಬಸಮ್ಮ ಕೋಂ: ಮಹಾಂತೇಶ @ ರಮೇಶ ಬಿಳೆಯಲಿ. ವಯಸ್ಸು: 22ವರ್ಷ
2. ಕು: ವಸಂತ S/o ಮಹಾಂತೇಶ ಬಿಳೆಯಲಿ. ವಯಸ್ಸು: 11ವರ್ಷ
3. ಕು: ನಾಗರಾಜ S/o ಮಹಾಂತೇಶ ಬಿಳೆಯಲಿ. ವಯಸ್ಸು: 3ವರ್ಷ
ಇವರೆಲ್ಲರ ವಿಳಾಸ– ಸಾ ॥ ಮುಳಗುಂದ, ತಾ॥ ಗದಗ, ಜಿ॥ ಗದಗ.

ವಿರುದ್ಧ

**ಪ್ರತಿವಾದಿಗಳು:–**

1. ದಿ. ಸೆಕ್ರೆಟರಿ, ಬ್ಲೂಮೂನ್ ಅಪಾರ್ಟ್‌ಮೆಂಟ್ಸ್, ಜನರ್ ಅಸೋಸಿಯೇಷನ್ಸ್, ಅಂಬಲಪಾಡಿ, ಮೇನ್ ರೋಡ್, ಉಡುಪಿ–576103.

### ಪ್ರಕಟಣೆ

ಅರ್ಜಿದಾರರಾದ 1. ಶ್ರೀಮತಿ. ರೇಣುಕಾ @ ಬಸಮ್ಮ ಕೋಂ: ಮಹಾಂತೇಶ @ ರಮೇಶ ಬಿಳೆಯಲಿ 2. ಕು: ವಸಂತ ತಂದೆ ಮಹಾಂತೇಶ ಬಿಳೆಯಲಿ. 3. ಕು: ನಾಗರಾಜ ತಂದೆ ಮಹಾಂತೇಶ ಬಿಳೆಯಲಿ. ತಾ ॥ ಮುಳಗುಂದ, ತಾ॥ ಗದಗ, ಜಿ॥ ಗದಗ. ಇವರು ತಾವು ಮೃತ ಮಹಾಂತೇಶ @ ರಮೇಶ ಶೇಖರಪ್ಪ ಬಿಳೆಯಲಿ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮಹಾಂತೇಶ @ ರಮೇಶ ಶೇಖರಪ್ಪ ಬಿಳೆಯಲಿ ಇವರು ಒಂದನೇ ಪ್ರತಿವಾದಿಗಳಾದ ದಿ. ಸೆಕ್ರೆಟರಿ, ಬ್ಲೂಮೂನ್ ಅಪಾರ್ಟ್‌ಮೆಂಟ್ಸ್, ಜನರ್ ಅಸೋಸಿಯೇಷನ್ಸ್, ಅಂಬಲಪಾಡಿ, ಉಡುಪಿ ಇವರಲ್ಲಿ ವಾಚ್‌ಮನ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ
ಗದಗ ಜಿಲ್ಲೆ ಗದಗ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು

**ಪಿ.ಆರ್.793**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪುರ

**ಸಂಖ್ಯೆ: ಕಾಅಬಿ–2:ಕಾನಪ:ಮಪ್ರ/ಎಸ್‌ಆರ್–7A/2011, ದಿನಾಂಕ: 20ನೇ ಜುಲೈ 2011.**

**ಅರ್ಜಿದಾರರು:**

1. ಶ್ರೀಮತಿ ಶಾರದಾ ಗಂ. ಕಲ್ಲಪ್ಪ ಮಣ್ಣೂರ ವಯಸ್ಸು: 35ವರ್ಷ, ಉದ್ಯೋಗ ಮನೆಗೆಲಸ
2. ಶ್ರೀ ಕಲ್ಲಪ್ಪ ತಂ. ಭೀಮಶಪ್ಪ ಮಣ್ಣೂರ ಸಾ: ಸೇಡಂ ಜಿ:ಗುಲ್ಬರ್ಗಾ ಸದ್ಯದ ವಾಸ: ಸ್ಟೇಶನ್ ಹಿಂದಿನ ರಸ್ತೆ, ವಿಜಾಪುರ.

**ವಿರುದ್ಧ**

**ಪ್ರತಿವಾದಿಗಳು:–**

1. ಶ್ರೀ ಹನುಮಂತರಾವ ತಂ. ರೇವಪ್ಪ ಬಿರಾದಾರ ವಾಹನ ಮಾಲೀಕರು, ವಯಸ್ಸು: ಪ್ರಾಪ್ತ. ಸಾ: ನರಮೋಳ ತಾ: ಚಿಂಚೋಳಿ ಜಿ: ಗುಲ್ಬರ್ಗಾ
2. ದಿ. ಬ್ರಾಂಚ್ ಮ್ಯಾನೇಜರ್, ದಿ. ನ್ಯಾಷನಲ್ ಇನ್ಸುರೆನ್ಸ್ ಕಂಪನಿ ಲಿ., ಬಿಲಗುಂದಿ ಬಿಲ್ಡಿಂಗ್, ಮಿನಿ ವಿಧಾನಸೌಧ ಎದುರು, ಗುಲ್ಬರ್ಗಾ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರಾದ ಶ್ರೀಮತಿ. ಶಾರದಾ ಗಂ. ಕಲ್ಲಪ್ಪ ಮಣ್ಣೂರ ಮತ್ತು ಶ್ರೀ ಕಲ್ಲಪ್ಪ ತಂ. ಭೀಮಶಪ್ಪ ಮಣ್ಣೂರ ಇವರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ ಅವರ ಮಗನಾಗಿದ್ದ ದಿ. ಅನಿಲಕುಮಾರ ತಂ ಕಲ್ಲಪ್ಪ ಮಣ್ಣೂರ ಈತನು ಕ್ಲೀನರ್ ನಾಗಿ ಪ್ರತಿವಾದಿಗಳಾದ ಶ್ರೀ ಹನುಮಂತರಾವ ತಂ. ರೇವಪ್ಪ ಬಿರಾದಾರ– ಇವರ ಲಾರಿ ಸಂಖ್ಯೆ ಎಮ್ ಇಝೆಡ್6979ರಲ್ಲಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: 26–1–2009ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ಅವರು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಗಳಿದ್ದರೆ ಅಥವಾ ಅರ್ಜಿದಾರರಲ್ಲದೆ ಬೇರೆ ಯಾರಾದರೂ/ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಹೊರಡಿಸಿ ಈ ನ್ಯಾಯಾಲಯದ ನೋಟೀಸ್ ಫಲಕದಲ್ಲಿ ಪ್ರದರ್ಶಿಸಿದ ಅಥವಾ 30 ದಿನದೊಳಗಾಗಿ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕೆಂದು ತಿಳಿಸಲಾಗಿದೆ. ಒಂದು ವೇಳೆ ನಿಗದಿ ಪಡಿಸಿದ ಅವಧಿಯಲ್ಲಿ ಬೇರೆ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ವಿಚಾರಣಾ ಕ್ರಮ ಜರುಗಿಸಲಾಗುವುದೆಂದು ಮತ್ತು ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲವೆಂದು ಸ್ಪಷ್ಟಪಡಿಸಲಾಗಿದೆ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ
ಉಪ ವಿಭಾಗ–2, ವಿಜಾಪುರ.

**ಪಿ.ಆರ್. 794**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ. ಸಂಖ್ಯೆ: ಕಾಲದಾ/ಕಾನಪ/ಸಿಆರ್–90/11 ದಿನಾಂಕ: 20ನೇ ಜುಲೈ 2011.**

**ಅರ್ಜಿದಾರರು:**

1. ಶ್ರೀಮತಿ ಹೊನ್ನಮ್ಮ ಕೋಂ. ಲೇಟ್ ಕೃಷ್ಣ
2. ಶ್ರೀಮತಿ ಲಕ್ಷ್ಮಮ್ಮ ಕೋಂ. ಲೇಟ್ ಗುರಪ್ಪ
3. ಪ್ರಿಯಾಂಕ ಬಿನ್ ಲೇಟ್ ಕೃಷ್ಣ–8 ವರ್ಷ
4. ಶಶಿಕಲಾ ಬಿನ್ ಲೇಟ್ ಕೃಷ್ಣ –6 ವರ್ಷ
5. ಅನುಷ್ ಬಿನ್ ಲೇಟ್ ಕೃಷ್ಣ –4 ವರ್ಷ 13ನೇ ಕ್ರಾಸ್, ಬಕ್ಕೇಶ್ವರ ಸ್ಕೂಲ್ ಹಿಂಭಾಗ, ಎಂ.ಸಿ.ಸಿ. ಎ ಬ್ಲಾಕ್, ದಾವಣಗೆರೆ

**ವಿರುದ್ಧ**

**ಪ್ರತಿವಾದಿಗಳು:–**

1. ದಿ ಪಾಲುದಾರರು, ಮಾರುತಿ ಕ್ಯಾರಿಯರ್ಸ್, ಲಾರಿ ಮಾಲೀಕರು, ನಂ. ಕೆ.ಎ. 17–ಎ 825 ರವಿ ವೆಜಿಟೇಬಲ್ಸ್ ಆಯಿಲ್ ಮಿಲ್ ಎದುರು ಚಿತ್ರದುರ್ಗ ರಸ್ತೆ, ದಾವಣಗೆರೆ
2. ದಿ ಬ್ರಾಂಚ್ ಮ್ಯಾನೇಜರ್, ಇಫ್ಕೋ ಟೋಕಿಯ ಜನರಲ್ ಇನ್ಸೂರೆನ್ಸ್ ಕಂ. ಲಿ., 127/ಎ ಭವಾನಿ ಆರ್ಕೇಡ್ಸ್, 3ನೇ ಮಹಡಿ, ಹಳೇ ಬಸ್‌ಸ್ಟ್ಯಾಂಡ್ ಹತ್ತಿರ, ಹೊಸ ಕಾಟನ್ ಮಾರ್ಕೆಟ್, ಹುಬ್ಬಳ್ಳಿ

**ಪ್ರಕಟಣೆ**

ಶ್ರೀಮತಿ ಹೊನ್ನಮ್ಮ, ಲಕ್ಷ್ಮಮ್ಮ ಪ್ರಿಯಾಂಕ, ಶಶಿಕಲಾ, ಅನುಷ ಇವರುಗಳಾದ ನಾವು ಮೃತ ಕೃಷ್ಣ ಇವರ ಹೆಂಡತಿ ಮಕ್ಕಳು ಮತ್ತು ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀ ಕೃಷ್ಣ ಇವರು ಒಂದನೇ ಪ್ರತಿವಾದಿಗಳಾದ ಮಾರುತಿ ಕ್ಯಾರಿಯರ್ಸ್ ಇವರ ಲಾರಿ ರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ

ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು,
ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪಿ.ಆರ್. 795**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್–64/2011 ದಿನಾಂಕ: 04ನೇ ಆಗಸ್ಟ್ 2011.**

**ಅರ್ಜಿದಾರರು:**

1. ಶ್ರೀಮತಿ ಪಾತೀಮಾಬಿ ಕೋಂ. ಬಾಷಾಸಾಬ್, ವಾಸ: ಗಿಡ್ಡೋಬನಹಳ್ಳಿ, ಹಿರಿಯೂರು (ತಾ), ಚಿತ್ರದುರ್ಗ (ಜಿ).
2. ಕು॥ ಯಾಸ್ಮೀನ್ ಬಿ ತಂದೆ : ಬಾಷಾಸಾಬ್

**ವಿರುದ್ಧ**

**ಪ್ರತಿವಾದಿಗಳು:–**

1. ಮೆ॥ ಮಾರ್ಡನ್ ರೋಡ್ ಮೇಕರ್ಸ್ ಪ್ರೈ., ಲಿ., ಐ.ಆರ್.ಬಿ. ಇನ್‌ಫ್ರಾಸ್ಟ್ರಕ್ಚರ್ ಡೆವಲಪರ್ಸ್ ಲಿ., ಐ.ಆರ್.ಬಿ. ಕಾಂಪ್ಲೆಕ್ಸ್, ಚಾಂದಿವ್ಲಿ ಫಾರಂ, ಚಾಂದಿವ್ಲಿ ವಿಲೇಜ್, ಅಂದೇರಿ (ಈಸ್ಟ್), ಮುಂಬೈ ಪ್ರೋಜೆಕ್ಟ್ ಆಫೀಸ್, ಮೆ॥ ಮಾರ್ಡನ್ ರೋಡ್ ಮೇಕರ್ಸ್ ಪ್ರೈ. ಲಿ., ಅಮುಲ್ಯ ನಿಲಯ, ವೇದಾವತಿ ನಗರ, 1ನೇ ಕ್ರಾಸ್, ಹಿರಿಯೂರು, ಚಿತ್ರದುರ್ಗ (ಜಿ).

### ಅಧಿಪ್ರಕಟಣೆ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಮೃತ ಶ್ರೀ ಮೊಹಮ್ಮದ್ ರಫೀ ತಂದೆ : ಲೇಟ್ ಬಾಷಾ ಸಾಬ್, ವಾಸ : ಗಿಡ್ಡೋಬನಹಳ್ಳಿ, ಗುಯಿಲಾಳು (ಅಂಚೆ) ಹಿರಿಯೂರು (ತಾ), ಚಿತ್ರದುರ್ಗ (ಜಿ), ಇವರು 1ನೇ ಪ್ರತಿವಾದಿಯಲ್ಲಿ ಕಾವಲುಗಾರರಾಗಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ : 12–04–2011 ರಂದು ಕೆಲಸ ನಿರ್ವಹಿಸುತ್ತಿದ್ದ ಜಾಗದಿಂದ ಸುಮಾರು 500 ಮೀಟರ್ ದೂರದಲ್ಲಿರುವ ನೀರಿನ ಗುಂಡಿಯಲ್ಲಿ ಸ್ನಾನ ಮಾಡಲು ಹೋಗಿ ಈಜು ಬಾರದೆ ಮೃತಪಟ್ಟಿರುತ್ತಾರೆಂದು ಪ್ರತಿವಾದಿಯು ಈ ನ್ಯಾಯಾಲಯದಲ್ಲಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಮೃತನ ಅವಲಂಬಿತರಿಗೆ ಪರಿಹಾರದ ಮೊತ್ತ ರೂ. 4,42,740–00 (ನಾಲ್ಕು ಲಕ್ಷದ ನಲವತ್ತೆರಡು ಸಾವಿರದ ಏಳು ನೂರಾ ನಲವತ್ತು ರೂಪಾಯಿ ಮಾತ್ರ) ಗಳನ್ನು ದಿನಾಂಕ : 17–05–2011 ರಂದು ಠೇವಣಿ ಮಾಡಿರುತ್ತಾರೆ. ಸದರಿ ಪರಿಹಾರದ ಮೊತ್ತವನ್ನು ಮೃತನ ಅವಲಂಬಿತರಿಗೆ ಬಿಡುಗಡೆ ಮಾಡಬೇಕಾಗಿರುತ್ತದೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್. ವೀಣಾ,**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪಿ.ಆರ್. 796**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub:** KVAT Act, 2003 – Clarification under Section 59(4) regarding the rate of tax applicable on `3MVA capacity electrical transformer` –reg.,

**Ref:** Application dated: 18-04-2011 of Rima Transformers and Conductors Pvt Ltd.,18-D, II Phase, Peenya Industrial Area, Bangalore- 560 058, TIN-29290098938.

In the application cited above, M/S Rima Transformers and Conductors Pvt Ltd.,18-D, II Phase, Peenya Industrial Area, Bangalore, has sought clarification regarding the rate of tax applicable on `3MVA capacity electrical transformer`.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.26/11-12, DATED 08-07-2011**

It is clarified that `3MVA capacity electrical transformer` is liable to tax at 14% under Section 4(1) (b) of the Karnataka Value Added Tax Act, 2003.

**PRADEEP SINGH KHAROLA**
Commissioner of Commercial Taxes,
(Karnataka), Bangalore.

**P.R. No: 800**

## PROCEEDINGS OF THE DIRECTOR MINES & GEOLOGY, BANGALORE.

**No.DMG:2 AML 96 & 38 AML 07:2011-12/4947, DATED 5th August 2011**

**RML-1482**

**Sub:** Renewal Application dtd.08-01-1996 and 12-01-2007 filed by M/s Srinivasa Calcio for renewal of Mininig Lease No.1482/1587 sanctioned in Sy.No. 83 of Kondli village, Gubbi taluk, Tumkur District over an extent of 89.03 Hectares (220 Acres) for Lime stone –reg.,

**Ref:** 1. Renewal Application No. 2 AML 96 dtd. 08-01-1996.
2. Renewal Application No. 38 AML 07 dtd. 12-01-2007.
3. This Office Notice No. ಗಭೂಇ 38 AML 07:RML-1482:2074:1190 dtd.01-07-2009.

**PREAMBLE:**

M/s Srinivasa Calcio was holding a Mining lease for Limestone & Dolomite over an extent of 89.03 Hectares (220 Acres) in Kondli village, Gubbi taluk, Tumkur District under Mininig Lease No. 1482/1587 Co-terminus with the original lease (ML No. 1332) period ending on 07-06-1996. The leassee period expired on 07-06-1996. The lessee had filed Renewal application on 08-01-1996(No. 2 AML 96). The Renewal Application was not valid as per Rule 24A(1) of MCR 1960. The Government in their letter No. CI 128 MMM 96 dtd.03-06-1996 have condoned the delay caused in filing of Renewal Application. The Mining lease area is a Forest area. As such, the lessee was informed to stop the mining work till he gets Forest Clearance from Forest Department as per Section-2 of FC Act 1980 vide This Office Notice No.DMG:02 AML 96: RML 1482-1587:16109-114 dtd.25-01-1997. The Forest Department also in their letter No.A6(2).MNG-CR.936:96-97 dtd.19-03-1997 informed the lessee to submit the suitable proposal to get the clearance from the Forest Department. Hitherto, the lessee has not submitted the F.C & other records nor he has shown any interest in getting lease renewal since 7-06-1996.

Further, the lessee has filed another renewal application on 12-01-2007 (vide No.38 AML 07) for renewal of lease. Another Notice has been issued from this office vide letter under reference (3) cited above informing him to submit the statutory documents required for renewal of lease within 30 days other wise, further course of action will be initiated to dispose the said two applications as per rules. In spite of it the lessee has not shown any interest in getting the lease renewed and also he has not furnished his replies to this Notice dtd.01-07-2009. Hence this order:

**ORDER**

I, H.R. Srinivasa, I.A.S., Director of Mines and Geology, in exercise of powers delegated under Government Notification No.CI 03 MMN 1995 dtd. 27-05-95, and Notification No.CI 214 MMM 2006 dtd. 09-02-2007, do hereby reject the above two Renewal applications dtd.08-01-1996 and 12-01-2007

**P.R. No: 799** DIRECTOR

**ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಹಾವೇರಿ.**

**ಕ್ರ.ಸಂ.ಜಿಪವಕಅ:ಎಸ್–1 :ಕಾಪತ:ಸಿಆರ್:2011–12 ದಿನಾಂಕ: 30–07–2011**

**ಪ್ರಕಟಣೆ**

**ವಿಷಯ:** 2011–12 ನೇ ಸಾಲಿಗಾಗಿ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂ SWD-68/SEW-89 ದಿನಾಂಕ: 02–11–1990.

2) ಸರ್ಕಾರಿ ಆದೇಶ ಸಂ:ಸಕಇ:349:ಪಕವಿ:05 ದಿನಾಂಕ: 28–01–06.

3) ಸರ್ಕಾರಿ ಆದೇಶ ಸಂ:ಸಕಇ:187:ಪಕಸೇ:2010 ದಿನಾಂಕ: 28–06–2011.

2011–12ನೇ ಸಾಲಿಗಾಗಿ **ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ** ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಕುರಿತು ಅರ್ಹ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ

| ಕ್ರ.ಸಂ | ಯೋಜನೆಯ ಹೆಸರು | ತರಬೇತಿಯ ಅವಧಿ | ತರಬೇತಿ ಶಿಷ್ಯವೇತನ (ಪ್ರತಿ ಮಾಹೆಯಾನ) ದಿನಾಂಕ:01–07–2011 ರಿಂದ ಅನ್ವಯ |
|---|---|---|---|
| 1 | ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ | 04 ವರ್ಷಗಳು | ರೂ 2,000,00 |

**ಅರ್ಹತೆಗಳು:**

1) ಸದರಿ ಯೋಜನೆಯಲ್ಲಿ ಅರ್ಜಿದಾರರು ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಾಗಿರಬೇಕು. ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಾಸುಮಾಡಿರಬೇಕು. ಅಂದರೆ 2009–10, 2010–11 ನೇ ಸಾಲಿನಲ್ಲಿ ಅಂತಿಮ ಕಾನೂನು ಪರೀಕ್ಷೆಗಳನ್ನು ಪಾಸಾದವರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.
2) ವಕೀಲಿ ವೃತ್ತಿಯನ್ನು ನಡೆಸಲು ಅರ್ಹತೆಗಳನ್ನು ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿಗಳನ್ನು ಸಲ್ಲಿಸಲು ಅರ್ಹರು.
3) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ಗರಿಷ್ಟ ವಯಸ್ಸು 35 ವರ್ಷ ಮೀರಿರಬಾರದು.
4) ಅಪೂರ್ಣ ಮತ್ತು ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
5) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು. ಬಿಟ್ಟು ಹೋದಲ್ಲಿ ಶಿಷ್ಯವೇತನವನ್ನು ಪರತ್ ವಸೂಲಿ ಮಾಡಲಾಗುವುದು.
6) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.2,000/–(ರೂ ಎರಡು ಸಾವಿರ ಮಾತ್ರ) ದಂತೆ ಶಿಷ್ಯವೇತನ ನೀಡಲಾಗುವುದು.
7) ಆಯ್ಕೆಯಾದ ಅಭ್ಯರ್ಥಿಗಳನ್ನು ಡಿಸ್ಟಿಕ್ ಪಬ್ಲಿಕ್ ಪ್ರಾಸಿಕ್ಯೂಟರ್ / ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಮೇಲ್ಪಟ್ಟು ವಕೀಲ ವೃತ್ತಿಯನ್ನು ನಡೆಸಿದ ಖಾಸಗಿ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

ಅರ್ಹ ಅಭ್ಯರ್ಥಿಗಳು ಸಂಬಂಧಿಸಿದ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳ ಕಚೇರಿ/ತಾಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಿಂದ ನಿಗದಿತ ಅರ್ಜಿ ನಮೂನೆ ಪಡೆದು ಅರ್ಜಿ ಪಡೆದು ಆದಾಯ ಪ್ರಮಾಣ ಪತ್ರ ಜಾತಿ ಪ್ರಮಾಣ ಪತ್ರ ಜನ್ಮ ದಾಖಲೆ ಕುರಿತು (ಎಸ್.ಎಸ್.ಎಲ್.ಸಿ.ಅಂಕಪಟ್ಟಿ) ತಾಲೂಕ ಮತ್ತು ಸ್ಟೇಟ್ ಬಾರ್ ಅಸೋಸಿಯೇಶನಲ್ಲಿ ಸದಸ್ಯತ್ವ ಪಡೆದ ಬಗ್ಗೆ ದೃಢೀಕರಣ ಪ್ರಮಾಣ ಪತ್ರ, ಕಾನೂನು ಪದವಿಯ ಅಂಕಪಟ್ಟಿಯೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು **ದಿನಾಂಕ:26–08–2011 ರೊಳಗಾಗಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಹಾವೇರಿ (ಎಲ್.ಐ.ಸಿ ಎದುರಿಗೆ ನೀಲನಗೌಡ್ರ ಕಾಂಪ್ಲೇಕ್ಸ, ಪಿ.ಬಿ.ರೋಡ, ಹಾವೇರಿ) ಇವರಿಗೆ ತಲುಪುವಂತೆ ಅರ್ಜಿ ಸಲ್ಲಿಸಬೇಕು.** (ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆ 08375–232032 ಸಂಪರ್ಕಿಸಲು ಸೂಚಿಸಿದೆ.)

ಸದಸ್ಯ ಕಾರ್ಯದರ್ಶಿ
ಜಿಲ್ಲಾ ಮಟ್ಟದ ಕಾನೂನು ಪದವೀಧರರ ಆಡಳಿತ
ನ್ಯಾಯಾಧೀಕರಣ ತರಬೇತಿ ಆಯ್ಕೆ ಸಮಿತಿ, ಹಾಗೂ
ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ, ಹಾವೇರಿ.

**ಪಿ.ಆರ್. 822**

## OFFICE OF THE ASSISTANT COMMISSIONER OF COMMERCIAL TAXES LOCAL VAT OFFICE-220, SHIVAMOGGA

### NOTIFICATION

Notified Authority Under Rule 6 (i) of the CST (Karnataka) Rules 1957

**No.ACCT/LVO-220/CR-11/11-12, Dated 11th August, 2011**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of CST (Karnataka) Rules 1957, it is hereby notified for general information that the declaration in Form-C described below is declared to be absolute and Invalid.

| Sl. No. | Number (including code No.) of declaration Forms Lost/ Destroyed or Stolen | Name and address of the dealer to whom declaration Forms/is/are issued by the department with date of "C" Form issue | Registration certificate No. of the dealer under CST Act 1956 | The Address of the dealer to whom the declaration is/are sent | Date of issue of Forms by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | "C" Form G/16 444582 in Original and Duplicate | M/s Pearlite Liners Pvt. Ltd., N.T.Road, Shimoga Date of issue: 12-12-2006 | Tin No: 29570012454 | M/s Forace Polymers Pvt.Ltd., Haridwar, Uttarakhand TIN: 05001786086 | 12-12-2006 | Lost while in Transit | Purchase 1) Bill No.615, Dated: 12-07-2006 for Rs.368897-00 2) Bill No.932, Dated: 28-08-2006 for Rs.390044-00 .'C' Form bearing Sl.No.G/16 444582 was issued on 12-12-2006 for Rs.758941-00 |

**M.T. PUTTARAMU,**
Assistant Commissioner of Commercial Taxes,
(Local Vat Office)-220, Shimoga.

**P.R. No: 823**

## PROCEEDINGS OF THE ASSISTANT COMMISSIONER OF COMMERCIAL TAXES (LOCAL VAT OFFICE)-220, SHIVAMOGGA

### DATED : 11th August,2011

**Present : M.T. Puttaramu, M.A., ACCT (LVO-220), Shimoga.**

**Sub:** Loss of "C" form in case of M/s Pearlite Liners Pvt. Ltd., N.T.Road, Shimoga.

**Read:** Letter dated: 14-06-2011 of M/s Pearlite Liners Pvt Ltd., N.T.Road, Shimoga.

**Preamble:**

M/s Pearlite Liners Pvt. Ltd., N.T.Road, Shimoga. is a registered dealer borne on the files of this office bearing TIN No. 29570012454. The Company in its letter cited at read above has intimated this office that one leaf of "C" form (Original & duplicate) bearing Sl.No.G/16444582 issued by this office is lost at the sellers end.

The company has produced the proof for having filed the complaint before Police Station, Bahadrabad, Haridwar (Dist) UK, and executed an Indemnity bond dated : 10-01-2011 in favour of the Government as laid down under Rule 12(2) and 12(9)

of CST Act 1956. The loss of "C" form bearing Sl.No.G/16 444582 was announced in Daily News paper i.e., "Amar Ujala" on 19-01-2011.

Since the "C" Form bearing Sl.No.G/16 444582 is stated to be lost at the sellers end and the same is treated as invalid. Hence this order.

**Order No.ACCT/LVO-220/CR-11/11-12,, Dated 11th August, 2011**

In view of the Circumstances explained above "C" Form filled by the dealer bearing Sl.No.G/16 444582 issued by this office oon 12-12-2006 to M/s Pearlite Liners Pvt. Ltd., N.T.Road, Shimoga is treated as invalid with immediate effect.

**M.T. PUTTARAMU,**

Assistant Commissioner of Commercial Taxes,

(Local Vat Office)-220, Shimoga.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಉಪವಿಭಾಗ ಹಾಸನ,**

**ಸಂಖ್ಯೆ: ಕಾನಪ:ಎಫ್:14/2011, ದಿನಾಂಕ: 10ನೇ ಆಗಸ್ಟ್ 2011.**

**ಅರ್ಜಿದಾರರು:**

1. ಶ್ರೀಮತಿ ಸುಬ್ಬಮ್ಮ ಕೋಂ. ಲೇಟ್ ಜಿ.ಬನ್ನೇರಿ,
2. ಮಂಜುನಾಥ ಬಿನ್ ಲೇಟ್ ಜಿ.ಬನ್ನೇರಿ, 19ವರ್ಷ
3. ರಮ್ಯ ಬಿನ್ ಲೇಟ್ ಜಿ.ಬನ್ನೇರಿ, 17ವರ್ಷ ವಾಸ:ಪೌರ ಕಾರ್ಮಿಕರ ಬೀದಿ, ಕಸಬಾ ಹೋಬಳಿ, ಸಕಲೇಶಪುರ ಟೌನ್, ಸಕಲೇಶಪುರ ತಾ:, ಹಾಸನ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:–**

1. ಶ್ರೀ ಎಂ.ಆರ್.ಸುಜಯ್ ಗೌಡ ಬಿನ್ ಎಂ.ಟಿ.ರಾಮಸ್ವಾಮಿ ಗೌಡ, ಪೂರ್ಣರಾಮ ಎಸ್ಟೇಟ್, ಮಲ್ಲಾಪುರ ಗ್ರಾಮ, ಕೆ.ಹೊಸಕೋಟೆ ಹೋಬಳಿ ಆಲೂರು ತಾ:, ಸಕಲೇಶಪುರ ತಾ:, ಹಾಸನ ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಅರ್ಜುನ ಇವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 09–07–2011 ರಂದು ಅಪಘಾತ ಹೊಂದಿ ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು

ಹಾಸನ ಉಪ ವಿಭಾಗ ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಉಪವಿಭಾಗ ಹಾಸನ,**

**ಸಂಖ್ಯೆ: ಕಾನಪ:ಎಫ್:15/2011, ದಿನಾಂಕ: 10ನೇ ಆಗಸ್ಟ್ 2011.**

**ಅರ್ಜಿದಾರರು:**

1. ಶ್ರೀಮತಿ ಗೌರಿ ಕೋಂ. ಲೇಟ್ ಮಹಾದೇವ
2. ಚಾಮುಂಡಿ ಬಿನ್ ಲೇಟ್ ಮಹಾದೇವ, 9ವರ್ಷ
3. ನೇತ್ರ ಬಿನ್ ಲೇಟ್ ಮಹಾದೇವ, 08ವರ್ಷ
4. ಮುರುಗ ಬಿನ್ ಕುಪ್ಪ, 25ವರ್ಷ ವಾಸ:ಪೌರ ಕಾರ್ಮಿಕರ ಬೀದಿ, ಕುಶಾಲನಗರ ಬಡಾವಣೆ, ಕಸಬಾ ಹೋಬಳಿ, ಸಕಲೇಶಪುರ ಟೌನ್, ಸಕಲೇಶಪುರ ತಾ:, ಹಾಸನ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:–**

1. ಶ್ರೀ ಎಂ.ಆರ್.ಸುಜಯ್ ಗೌಡ ಬಿನ್ ಎಂ.ಟಿ.ರಾಮಸ್ವಾಮಿಗೌಡ, ಪೂರ್ಣರಾಮ ಎಸ್ಟೇಟ್, ಮಲ್ಲಾಪುರ ಗ್ರಾಮ, ಕೆ.ಹೊಸಕೋಟೆ ಹೋಬಳಿ ಆಲೂರು ತಾ:, ಹಾಸನ ಜಿಲ್ಲೆ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಮಹಾದೇವ ಇವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 09–07–2011 ರಂದು ಅಪಘಾತ ಹೊಂದಿ ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಹಾಸನ ಉಪ ವಿಭಾಗ ಹಾಸನ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಹಾಸನ ಉಪವಿಭಾಗ ಹಾಸನ,**

**ಸಂಖ್ಯೆ: ಕಾನಪ:ಎಫ್:16/2011, ದಿನಾಂಕ: 11ನೇ ಆಗಸ್ಟ್ 2011.**

**ಅರ್ಜಿದಾರರು:**

1. ಶ್ರೀ ರಾಮಣ್ಣ ಬಿನ್ ಕೆಂಚಪ್ಪ,
2. ಶ್ರೀಮತಿ ಗಂಗಮ್ಮ ಕೋಂ ರಾಮಣ್ಣ, ತಣ್ಣೀರು ಹಳ್ಳ, ಹಾಸನ ನಗರ.

ವಿರುದ್ಧ

**ಪ್ರತಿವಾದಿಗಳು:–**

1. ಶ್ರೀ ಉಮೇಶ್ ಹೆಗ್ಡೆ, ಪ್ರೊಪ್ರೈಟರ್, ಮೆ: ಹೆಗಡೆ ಬಲ್ಕ್ ಕ್ಯಾರಿಯರ್ಸ್, ಕಾನಾ ಸೂರತ್ಕಲ್ ತಾ: ದಕ್ಷಿಣ ಕನ್ನಡ ಜಿಲ್ಲೆ(ಮಂಗಳೂರು)
2. ವ್ಯವಸ್ಥಾಪಕರು, ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ., ಶ್ರೀ ವಿಠಲ್ ಎನ್ ಹೆಚ್–17, ಮುಖ್ಯರಸ್ತೆ, ಮಂಗಳೂರು–675014,

**ಪ್ರತಿನಿಧಿ:**

ವ್ಯವಸ್ಥಾಪಕರು, ಯುನೈಟೆಡ್ ಇಂಡಿಯಾ ಇನ್‌ಶ್ಯೂರೆನ್ಸ್ ಕಂ.ಲಿ., ಹಾಸನ ವಿಭಾಗ, ವೆಂಕಟೇಶ್ವರ ಬಿಲ್ಡಿಂಗ್, ವೆಂಕಟೇಶ್ವರ ಸರ್ಕಲ್, ಬಿ.ಎಂ.ರಸ್ತೆ, ಹಾಸನ

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಶ್ರೀ ಮಂಜುನಾಥ ಇವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 18–01–2010 ರಂದು ಅಪಘಾತ ಹೊಂದಿ ಮರಣ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಮೃತರ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ಮೇಲೆ ನಿಗದಿಪಡಿಸಿರುವ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್.ಎಲ್. ಗುರುಪ್ರಸಾದ್**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಹಾಸನ ಉಪ ವಿಭಾಗ ಹಾಸನ.

**ಪಿ.ಆರ್. 825**

## COMMERCIAL TAXES DEPARTMENT

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.**

**Sub :** KVAT Act, 2003-Clarification under Section 59(4) regarding the rate of tax applicable on 'corrugated plastic sheet `or` plastic boards`.

**Ref :** Application dated: 08-04-2011 of Neeraj Mithal, Director, Plasmix (P) Limited, plot No.404, 11th Cross, 4th Phase, Peenya Industrial Area,, Bangalore-560 058. TIN:29240054394.

The registered dealer under the Act, Plasmix (P) Limited, Bangalore, has sought clarification regarding the rate of tax applicable on 'corrugated plastic sheet `or` plastic boards`

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.20/11-12, DATED 27-07-2011**

It is clarified that 'corrugated plastic sheet ` is liable to tax at 14% under the Section 4(1)(b) of the Karnataka Value Added Tax Act, 2003.

**PRADEEP SINGH KHAROLA,**
Commissioner of Commercial Taxes,
(Karnataka), Bangalore.

**P.R. No: 826**

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆಗಳ ಕಾರ್ಯಾಲಯ–1.**

**ಸಂಖ್ಯೆ: ವಾತೆಅಆ(ಗು&ಸ)/ಸಆ/ಸಿಆರ್–14/11–12, ದಿನಾಂಕ: 28ನೇ ಜುಲೈ, 2011.**

**ವಾಣಿಜ್ಯ ತೆರಿಗೆಗಳ ಆಯುಕ್ತರು, (ಕರ್ನಾಟಕ), ಬೆಂಗಳೂರು ರವರ ಸುತ್ತೋಲೆ ಸಂಖ್ಯೆ: 17/2011–12.**

**ವಿಷಯ:** "ಇ–ಸುವೇಗ" ಪ್ರಶಿಕ್ಷಣ ಮಾಸಾಚರಣೆ ಆಚರಿಸುವ ಕುರಿತು.

ಸರಕು ವಾಹನದ ಚಾಲಕರು ಅಥವಾ ಸರಕು ಸಾಗಾಣಿಕೆದಾರರ ನಡುವೆ "ಇ–ಸುವೇಗ" ವಿಧಾನದ ಬಗ್ಗೆ ಜನಪ್ರಿಯಗೊಳಿಸಲು ದಿನಾಂಕ: 01–07–2011 ರಿಂದ 15–07–2011ರವರೆಗಿನ ಅವಧಿಯನ್ನು "ಇ–ಸುವೇಗ ಪ್ರಶಿಕ್ಷಣದ ಪಕ್ಷಾಚರಣೆ" ಯಾಗಿ ಆಚರಿಸಲು ದಿನಾಂಕ: 21–06–2011 ರಂದು ಸೂಚಿಸಲಾಗಿತ್ತು ಪುನಃ ಈ ಅವಧಿಯನ್ನು 31–07–2011ರವರೆಗೆ ವಿಸ್ತರಿಸಲಾಗಿತ್ತು.

ರಾಜ್ಯದ ಎಲ್ಲಾ ವಾಣಿಜ್ಯ ತೆರಿಗೆ ತನಿಖಾ ಠಾಣೆಯ ಅಧಿಕಾರಿಗಳು ಮತ್ತು ಸಿಬ್ಬಂದಿ ಹೊಸದಾಗಿ ರೊಟೇಷನ್ ಅಡಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿದ್ದು, "ಇ–ಸುವೇಗ" ಸನ್ನಿವೇಶಕ್ಕೆ ಹೊಂದಿಕೊಳ್ಳಲು ಮತ್ತು ಈ ಬಗ್ಗೆ ಪರಿಣಿತರಾಗಲು ಸ್ವಲ್ಪ ಕಾಲಾವಕಾಶದ ಅಗತ್ಯವಿದೆ.

ಹೊರ ರಾಜ್ಯದ ಸರಕು ಸಾಗಾಣಿಕೆದಾರರು ಈ ಬಗ್ಗೆ ಇನ್ನೂ ಒಂದು ತಿಂಗಳು ಕಾಲಾವಕಾಶ ಕೋರಿರುತ್ತಾರೆ.

ಈ ಮೇಲ್ಕಂಡ ಕಾರಣಗಳಿಂದ "ಇ–ಸುವೇಗ"ದ ಪ್ರಯೋಜನ ಕುರಿತು ಮಾಹಿತಿಯನ್ನು ಜನಪ್ರಿಯಗೊಳಿಸಲು ದಿನಾಂಕ: 01–08–2011 ರಿಂದ 31–08–2011ರವರೆಗಿನ ಅವಧಿಯನ್ನು "ಇ–ಸುವೇಗ ಪ್ರಶಿಕ್ಷಣದ ಮಾಸಾಚರಣೆ" ಯಾಗಿ ಮುಂದುವರೆಸಲು ವಾಣಿಜ್ಯ ತೆರಿಗೆ ತನಿಖಾ ಠಾಣೆಯ ಎಲ್ಲಾ ಅಧಿಕಾರಿಗಳಿಗೆ ಸೂಚಿಸಲಾಗಿದೆ.

**ಪ್ರದೀಪ್ ಸಿಂಗ್ ಖರೋಲ**
ವಾಣಿಜ್ಯ ತೆರಿಗೆಗಳ ಆಯುಕ್ತರು,
(ಕರ್ನಾಟಕ), ಬೆಂಗಳೂರು.

**ಪಿ.ಆರ್. 827**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003-Clarification under Section 59(4) regarding the rate of tax applicable on `weighing machinery`-reg.,

**Ref :** Application dated: 03-06-2011 of B. Dinesh Bhandarkar & Bros., Golikatta Bazaar, J.M.Road, Bunder, Mangalore-575 001. TIN:29620276218.

The registered dealer under the Act, B. Dinesh Bhandarkar & Bros., Mangalore, has sought clarification regarding the rate of tax applicable on `weighing machinery `.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. The issue was examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.56/11-12, DATED 28-07-2011**

It is clarified that `weighing machinery covered under CET Codes 8423.82/8423.90.20 having maximum capacity exceeding

30 kgs but not exceeding 5000Kgs` is liable to tax at 5% as per serial no.12 in the table of the notification No.FD 316 CSL 2005(I),dated:05-08-2005 read with entry 20 of the Third Schedule to the Karnataka Value Added Tax Act,2003 on all local sales irrespective of the status of the buyer, as capital goods.

**PRADEEP SINGH KHAROLA,**

Commissioner of Commercial Taxes,

(Karnataka), Bangalore.

**P.R. No: 828**

### ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ

**ಪ್ರಕರಣ ಸಂಖ್ಯೆ: ಡಬ್ಲೂ.ಸಿ.ಎ:ಎಫ್.ಸಿ–07/2011**

**ಅರ್ಜಿದಾರರು:**

1. Bhagyamma W/o Late M.Mahadeva
2. Chandu S/o Late M.Mahadeva
3. Chentan S/o Late M.Mahadeva
4. Muniyamma W/o Muniyappa
5. Muniyappa S/o Late Munishamappa @ Shivanna R/o Kadahalli Village Ammanallur Post Vemagal Hobli, Kolar

**V/S**

**ಪ್ರತಿವಾದಿಗಳು:–**

1. K. Devraja S/o Kempanna R/o Chalgatta Village Madderi post, Vemgal Hobli, Kolar Tq.
2. Shriram General Insurance Co. Ltd., M.B Road, Kolar.

**ಅಧಿಸೂಚನೆ**

ಅರ್ಜಿದಾರರಾದ Smt. Bhagyamma ಅವರು ಗಂಡ Late M.Mahadeva ಅವರು 1ನೇ ಪ್ರತಿವಾದಿ K. Devraja ರವರ ಬಳಿ ಚಾಲಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 24–12–2010 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ

ನ್ಯಾಯಾಲಯವು ಯಾವ ಕ್ಲೇಂ, ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 11–08–2011 ರಂದು ನೀಡಲಾಗಿದೆ.

**ಎಸ್. ರೇವಣ್ಣ,**

ಕಾರ್ಮಿಕ ಅಧಿಕಾರಿ ಮತ್ತುಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು,ಕೋಲಾರ ಉಪ ವಿಭಾಗ, ಕೋಲಾರ

**ಪಿ.ಆರ್.835**

**ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು–18.**

**ಸಂ:ಜೆಆರ್‌ಬಿ:ಸಮಾಪನೆ:32:2010–11, ದಿನಾಂಕ: 05–08–2011.**

**ವಿಷಯ:** ಸಮಾಪನೆಯಲ್ಲಿರುವ ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ., ನಿ ಕೋಲಾರ ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಇವರ ಪತ್ರದ ಸಂಖ್ಯೆ:ಉನಿಕೋ/ಎಲ್‌ಕ್ಯೂಡಿ/2114/2001–02, ದಿನಾಂಕ:28–09–2006.
2) ಈ ಕಛೇರಿಯ ಸಮಸಂಖ್ಯೆಯ ಕಾರಣ ಕೇಳುವ ನೋಟೀಸಿನ ದಿನಾಂಕ: 19–02–2007.
3) ಈ ಕಛೇರಿಯ ಇದೇ ಸಮಸಂಖ್ಯೆಯ ಆದೇಶದ ದಿನಾಂಕ: 30–05–2007.
4) ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಇವರ ಪತ್ರ ಸಂಖ್ಯೆ:ಉನಿಕೋ/ಎಲ್‌ಕ್ಯೂಡಿ/2114/2001–02, ದಿನಾಂಕ: 14–08–2007.
5) ಈ ಕಛೇರಿಯ ಸಮಸಂಖ್ಯೆಯ ಪತ್ರದ ದಿನಾಂಕ: 11–12–2007
6) ಮಾನ್ಯ ಶ್ರೀ ವರ್ತೂರು ಪ್ರಕಾಶ್, ಶಾಸಕರು ಇವರ ಪತ್ರದ ಸಂಖ್ಯೆ:ಸಸಿಕ/684/11, ದಿನಾಂಕ: 11–03–2011.
7) ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಇವರ ಪತ್ರ ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/214/2008–09, ದಿನಾಂಕ: 15–03–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ತಾಲ್ಲೂಕು ಗ್ರಾಮೋದ್ಯೋಗ ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ., ಕೋಲಾರ, ಈ ಸಂಘವನ್ನು ಸಮಾಪನೆಗೊಳಿಸಲು ಕೋರಿ ಪ್ರಸ್ತಾವವನ್ನು ಉಲ್ಲೇಖ (1) ರ ರೀತ್ಯಾ ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ, ಇವರು ಈ ಕಛೇರಿಗೆ ಶಿಫಾರಸ್ಸು ಮಾಡಿದ್ದರು. ಸಮಾಪನಾ ಪ್ರಕ್ರಿಯೆಗೆ ಪೂರಕವಾಗಿ ಉಲ್ಲೇಖ (2)ರಲ್ಲಿ ಕಾರಣ ಕೇಳುವ ನೋಟೀಸನ್ನು ಈ ಕಛೇರಿಯಿಂದ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೀಡಲಾಗಿದ್ದು, ಸದರಿ ನೋಟೀಸಿಗೆ ಆಡಳಿತ ಮಂಡಳಿಯವರು ಯಾವುದೇ ಸಮರ್ಪಕ ಹೇಳಿಕೆ ನೀಡದಿರುವುದರಿಂದ ಉಲ್ಲೇಖ (3)ರ ಈ ಕಛೇರಿಯ ಪತ್ರದಲ್ಲಿ ಸದರಿ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಲಾಗಿತ್ತು. ನಂತರ ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ ಇವರು ಉಲ್ಲೇಖ (4)ರ ಪತ್ರದಲ್ಲಿ ಸಮಾಪನೆಗೊಂಡ ತಾಲ್ಲೂಕು ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿ., ಕೋಲಾರ. ಈ ಸಂಘವನ್ನು ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಕೋಲಾರ ಮತ್ತು ಜನತಾ ಬಜಾರ್, ಕೋಲಾರ. ಇದರಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 14 ರನ್ವಯ ವಿಲೀನಗೊಳಿಸುವಂತೆ ಸಮಾಪನಾಧಿಕಾರಿಯ ನಿರ್ಣಯ ಮತ್ತು ಒಪ್ಪಿಗೆಯನ್ನು ತಿಳಿಸುತ್ತಾ, ಅನುಮತಿ ನೀಡಲು ಪ್ರಸ್ತಾವೆ ಸಲ್ಲಿಸಿದರು. ಈ ಬಗ್ಗೆ ಪರಿಶೀಲಿಸಿ ಕಲಂ 14 ರನ್ವಯ ವಿಲೀನಗೊಳಿಸಲು ಪರಿಗಣಿಸುವುದು ಯೋಗ್ಯವಲ್ಲವೆಂದು ಉಲ್ಲೇಖ (5) ರ ಈ ಕಛೇರಿಯ ಪತ್ರದಲ್ಲಿ ತಿಳಿಸಲಾಗಿತ್ತು.

ತದನಂತರದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಕೋಲಾರ, ಇವರು ಸಮಾಪನೆಯಲ್ಲಿರುವ ಸದರಿ ಸಂಘದ 120'X50' ಅಡಿ ವಿಸ್ತೀರ್ಣದ ನಿವೇಶನವನ್ನು ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ ವಶಕ್ಕೆ ಮಂಜೂರು ಮಾಡಿಕೊಡಲು ಕೋರಿ ಪ್ರಸ್ತಾವವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಪ್ರಸ್ತಾವೆ ಸಲ್ಲಿಸಿದ್ದರು ಹಾಗೂ ಈ ಕಛೇರಿ ಸಮಸಂಖ್ಯೆಯ ಪತ್ರ ದಿನಾಂಕ: 12–05–2011ರಲ್ಲಿ ವಿವರವಾದ ಪತ್ರವನ್ನು ಬರೆದು ವಸ್ತುಸ್ಥಿತಿಯನ್ನು ಹಾಗೂ ಸಂಘದ ಸ್ಥಿರಾಸ್ತಿಯನ್ನು ಸರ್ಕಾರದ ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳಿಗೆ ಸದ್ವಿನಿಯೋಗ ಮಾಡಿಕೊಳ್ಳುವುದರ ಬಗ್ಗೆಯೂ ಕೂಡ ತಿಳಿಸಿ ಸೂಕ್ತ ಕ್ರಮಕ್ಕಾಗಿ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರನ್ನು ಕೋರಲಾಗಿದೆ.

ಉಲ್ಲೇಖ (6)ರ ಪತ್ರದಲ್ಲಿ ಮಾನ್ಯ ಶ್ರೀ ಆರ್. ವರ್ತೂರ್ ಪ್ರಕಾಶ್, ಶಾಸಕರು ಇವರು ತಾಲ್ಲೂಕು ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ಸಹಕಾರ ಸಂಘ ನಿ., ಕೋಲಾರ, ಈ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಸಂಘದ ಸದಸ್ಯರ ಮನವಿಯನ್ನು ಪ್ರಸ್ತಾಪಿಸಿ ಮಾನ್ಯ ಸಹಕಾರ ಸಚಿವರಿಗೆ ಪತ್ರ ಬರೆದಿದ್ದು, ಮಾನ್ಯ ಸಚಿವರು ಸದರಿ ಪತ್ರದಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಸೂಚನೆ ನೀಡಿರುತ್ತಾರೆ. ಕೋಲಾರ ವಿಧಾನಸಭಾ ಕ್ಷೇತ್ರದ

ಮಾನ್ಯ ಶಾಸಕರ ಪತ್ರ ಮಾನ್ಯ ಸಹಕಾರ ಸಚಿವರ ಟಿಪ್ಪಣಿ ಹಾಗೂ ಸದಸ್ಯರ ಕೋರಿಕೆಯ ಹಿನ್ನೆಲೆಯಲ್ಲಿ ಸಂಘದ ಪುನಃಶ್ಚೇತನದ ಪ್ರಸ್ತಾವದ ಬಗ್ಗೆ ಸಾಧಕ–ಭಾಧಕಗಳನ್ನು ಪರಿಶೀಲಿಸಿ ಸ್ಪಷ್ಟ ಅಭಿಪ್ರಾಯದೊಂದಿಗೆ ಪ್ರಸ್ತಾವ ಸಲ್ಲಿಸಲು ಉಪ ನಿಬಂಧಕರು, ಕೋಲಾರ ಇವರಿಗೆ ಸೂಚಿಸಲಾಗಿತ್ತು. ಸದರಿಯವರು ಉಲ್ಲೇಖ (7)ರ ಪತ್ರದಲ್ಲಿ ಸ್ಪಷ್ಟ ಅಭಿಪ್ರಾಯದೊಂದಿಗೆ ಹಾಗೂ ಸಂಘವು ಹೊಂದಿರುವ 120'X50' ಅಡಿ ವಿಸ್ತೀರ್ಣದ ನಿವೇಶನವನ್ನು ಸರ್ಕಾರದ ಸಹಕಾರ ಇಲಾಖೆಗೆ ವಹಿಸಿಕೊಡುವ ಪ್ರಸ್ತಾಪದೊಂದಿಗೆ ಸಂಘವನ್ನು ಪುನಃಶ್ಚೇತನಗೊಳಿಸುವಂತೆ ಶಿಫಾರಸ್ಸು ಮಾಡಿರುವುದನ್ನು ಸಕಾರಾತ್ಮಕವಾಗಿ ಪರಿಗಣಿಸಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಉಪ ನಿಬಂಧಕರು, ಕೋಲಾರ ಇವರ ಶಿಫಾರಸ್ಸಿನ ಮೇರೆಗೆ ಸದರಿ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಪುನಃಶ್ಚೇತನ ಆದೇಶ ಹೊರಡಿಸಲಾಗಿದೆ.

## ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂ:ಸಿಓ/139/ಸಿಎಲ್ಎಂ/2010, ದಿನಾಂಕ: 17–02–2011ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ತಾಲ್ಲೂಕು ಗ್ರಾಮೋದ್ಯೋಗ ಕಸುಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಕೋಲಾರ, ಈ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯನ್ನು ನೇಮಕ ಮಾಡಿರುವ ಉಲ್ಲೇಖ (3) ರ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸಿ ಆದೇಶಿಸಿದೆ.

ಪುನಃಶ್ಚೇತನಗೊಂಡ ಸಂಘಕ್ಕೆ 2011–12 ರಿಂದ 2015–16ನೇ ಸಾಲುಗಳ ಅವಧಿಗೆ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ಚುನಾವಣಾಧಿಕಾರಿಯಾಗಿ ಶ್ರೀ ಎಂ. ಜಗದೀಶ, ನಿರೀಕ್ಷಕರು, ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಕೋಲಾರ, ಇವರನ್ನು ನೇಮಕ ಮಾಡಲಾಗಿದೆ. ಚುನಾವಣಾಧಿಕಾರಿಗಳು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳು ಮತ್ತು ಸಂಘದ ಉಪನಿಯಮಗಳನ್ವಯ ಆಡಳಿತ ಮಂಡಳಿ ನಿರ್ದೇಶಕರನ್ನು ಚುನಾಯಿಸಲು ಚುನಾವಣೆ ನಡೆಸತಕ್ಕದ್ದು ಹಾಗೂ ಚುನಾವಣಾ ಫಲಿತಾಂಶವನ್ನು ಸಂಬಂಧಿಸಿದ ಸಂಘಕ್ಕೆ ಹಾಗೂ ಸಂಬಂಧಪಟ್ಟ ಅಧಿಕಾರಿಗಳಿಗೆ ಮತ್ತು ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಷರತ್ತುಗಳು:**

1. ಸಂಘವು ಈ ಆದೇಶ ಹೊರಡಿಸಿದ ಒಂದು ತಿಂಗಳೊಳಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ನಿಯಮ ಹಾಗೂ ಸಂಘದ ಉಪನಿಯಮಗಳನ್ವಯ ಆಡಳಿತ ಮಂಡಳಿಯನ್ನು ಪುನರ್‌ರಚಿಸಲು ಕ್ರಮಕೈಗೊಳ್ಳತಕ್ಕದ್ದು.
2. ಸಂಘದ 91–92 ನೇ ಸಾಲಿನವರೆವಿಗೂ ಲೆಕ್ಕಪರಿಶೋಧನೆ ನಡೆದಿದ್ದು, ನಂತರದಲ್ಲಿ ಲೆಕ್ಕಪರಿಶೋಧನೆ ನಡೆದಿರುವ ಬಗ್ಗೆ ಪರಿಶೀಲಿಸಿ ಖಚಿತಪಡಿಸಿಕೊಳ್ಳತಕ್ಕದ್ದು ಹಾಗೂ ಸಂಬಂಧಪಟ್ಟ ಇಲಾಖೆಯಲ್ಲಿ ವ್ಯವಹರಿಸಿ ವರದಿ ಪಡೆಯತಕ್ಕದ್ದು ಹಾಗೂ ಲೆಕ್ಕಪರಿಶೋಧನೆ ನಡೆಸಲು ಅಗತ್ಯ ಅನುಸರಣೆ ಕ್ರಮವಿಡತಕ್ಕದ್ದು.
3. ಸಂಘದ ಸುಪರ್ದಿಯಲ್ಲಿರುವ 120'X50' ಅಡಿ ವಿಸ್ತೀರ್ಣದ ನಿವೇಶನದ ನಿರ್ವಹಣೆ/ಪರಭಾರೆ ವಿಚಾರದಲ್ಲಿ ಮುಂದೆ ಇಲಾಖೆಯಿಂದ ಯಾವುದೇ ನಿರ್ದೇಶನ ನೀಡಿದಂತಹ ಸಂದರ್ಭದಲ್ಲಿ ಅದರಂತೆ ಸಂಘವು ಪಾಲಿಸತಕ್ಕದ್ದು. ಹಾಗೂ ಸಂಘವು ನಿರ್ವಹಣೆ ಪರಭಾರೆ ಅಥವಾ ಕಟ್ಟಡ ಕಟ್ಟುವ ವಿಚಾರದಲ್ಲಿ ಸಂಘವು ಏಕಪಕ್ಷೀಯವಾಗಿ ತೀರ್ಮಾನ ಕೈಗೊಳ್ಳದೇ ಇಲಾಖೆಯ ಗಮನಕ್ಕೆ ತಂದು ಇಲಾಖೆಯಿಂದ ಅನುಮತಿ ಪಡೆದ ನಂತರವೇ ತೀರ್ಮಾನ ತೆಗೆದುಕೊಳ್ಳತಕ್ಕದ್ದು.
4. ಸಮಾಪನಾಧಿಕಾರಿಗಳು ಚುನಾವಣೆ ನಡೆದ ನಂತರ ನೂತನ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವುದು ಹಾಗೂ ಸಮಾಪನಾಧಿಕಾರಿಗಳು ಅವರ ಅವಧಿಯಲ್ಲಿ ವ್ಯವಹಾರ ಮಾಡಿದ್ದಲ್ಲಿ ಸದರಿ ಲೆಕ್ಕಗಳನ್ನು ಅಳವಡಿಸಿಕೊಂಡು ಲೆಕ್ಕಪರಿಶೋಧನೆಗೆ ಒಳಪಡಿಸಿಕೊಳ್ಳಲು ಆಡಳಿತ ಮಂಡಳಿಯವರು ಕ್ರಮಕೈಗೊಳ್ಳತಕ್ಕದ್ದು.
5. ನೂತನವಾಗಿ ಚುನಾಯಿತರಾದ ಆಡಳಿತ ಮಂಡಳಿಯವರು ನ್ಯಾಯಾಲಯ/ಕಛೇರಿಗಳಲ್ಲಿರುವ ವ್ಯಾಜ್ಯ ಮತ್ತು ಸಂಘದ ಜವಾಬ್ದಾರಿಗಳಿಗೆ ಸಂಪೂರ್ಣ ಹೊಣೆಗಾರರಾಗಿರುತ್ತಾರೆ.
6. ಸಂಘವು ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ ಬೆಂಗಳೂರುರವರ ಆದೇಶ ಸಂ:ಹೆಚ್ಎಸ್ಜಿ–1/184/ಹೆಚ್ಹೆಚ್ಎಸ್/07–08, ದಿನಾಂಕ:29–3–2008ರ ನಿರ್ದೇಶನಗಳು ಮತ್ತು ಸುತ್ತೋಲೆ ಸಂಖ್ಯೆ: ಆರ್ಎಸ್ಆರ್/226/ಎಕ್ಸ್ಎಂಸಿ/2007–08, ದಿನಾಂಕ:29–03–2008 ನ್ನು ಅಳವಡಿಸಿಕೊಂಡು ಕಾರ್ಯನಿರ್ವಹಿಸತಕ್ಕದ್ದು ಹಾಗೂ ಈ ಬಗ್ಗೆ ಸಂಘದ ಉಪನಿಯಮದಲ್ಲಿ ಅಳವಡಿಸಿಕೊಳ್ಳಲು ಸೂಕ್ತ ಕ್ರಮಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರ್ ನಿಶಿಯೊಂದಿಗೆ ದಿನಾಂಕ: 05–08–2011 ರಂದು ಆದೇಶ ಹೊರಡಿಸಿರುತ್ತೇನೆ.

**ಸಿ.ಎಸ್. ವೀರೇಶ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**ಪಿ.ಆರ್. 836**

**ಕಂದಾಯ ಇಲಾಖೆ**

**ಸಂ: ಕಂಇ 36 ಎಲ್‌ಆರ್‌ಎಂ 2011, ದಿನಾಂಕ: 01–08–2011.**

**ಅಧಿಸೂಚನೆ**

ಅಲ್‌ವುದ ವೆಲ್‌ಫೇರ್ ಟ್ರಸ್ಟ್ (ರಿ), ಮೈಸೂರು, ಇವರಿಗೆ ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕಿನ ರಮ್ಮನಹಳ್ಳಿ ಗ್ರಾಮದ ಸರ್ವೆ ನಂ.175/1 ಮತ್ತು ಇತರೆಗಳಲ್ಲಿ ಒಟ್ಟು 23 ಎಕರೆ 23 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ನಮೂನೆ 15–ಎ ಮತ್ತು ನಮೂನೆ 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಮೈಸೂರು ಜಿಲ್ಲೆ, ಇವರ ಪತ್ರ ಸಂಖ್ಯೆ: ಎಲ್‌ಅರ್‌ಎಫ್/ಎಸ್‌ಪಿಎಲ್–11/2009–10 ದಿನಾಂಕ: 03–09–2009 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ (ತಿದ್ದುಪಡಿ)2005ರ ಕಲಂ 109 (1)(ಎ) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಸಲು ಖಾತೆದಾರರಿಂದ ವ್ಯವಹರಿಸಿಕೊಂಡಿದ್ದು ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ63, 79ಎ,79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63. 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಅಲ್‌ವುದ ವೆಲ್‌ಫೇರ್ ಟ್ರಸ್ಟ್ (ರಿ), ಮೈಸೂರು, ಇವರಿಗೆ ಮೈಸೂರು ಜಿಲ್ಲೆ, ಮೈಸೂರು ತಾಲ್ಲೂಕಿನ ರಮ್ಮನಹಳ್ಳಿ ಗ್ರಾಮದ ಸರ್ವೆ ನಂ.175/1 ಮತ್ತು ಇತರೆಗಳಲ್ಲಿ ಒಟ್ಟು 23 ಎಕರೆ 23 ಗುಂಟೆ ಜಮೀನನ್ನು **ಶೈಕ್ಷಣಿಕ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1ಎ) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನಾರಾಯಣಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್.839**

## ಕಂದಾಯ ಇಲಾಖೆ

**ಸಂ :ಕಂಇ 11 ಎಲ್ಆರ್ಎ 2011, ದಿನಾಂಕ: 01-08-2011.**

**ಅಧಿಸೂಚನೆ**

ಶ್ರೀ ಶೈಲಾ ಫಾರಂ ಪ್ರೈವೇಟ್ ಲಿಮಿಟೆಡ್, ಭೀಮಸಮುದ್ರ, ಚಿತ್ರದುರ್ಗ ಜಿಲ್ಲೆ, ಇವರು ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ತಾಲ್ಲೂಕು, ಭೀಮಸಮುದ್ರ ಗ್ರಾಮದ ಸರ್ವೆ ನಂ.71/3ರಲ್ಲಿ 0.22 ಗುಂಟೆ, ಸರ್ವೆ ನಂ.48/1ರಲ್ಲಿ 2.29 ಎಕರೆ ಮತ್ತು ಸರ್ವೆ ನಂ.61/1ರಲ್ಲಿ 1.26 ಎಕರೆ ಹೀಗೆ ಒಟ್ಟು 4.07 ಎಕರೆ/ಗುಂಟೆ ಕೃಷಿ ಜಮೀನನ್ನು ತೋಟಗಾರಿಕೆ **ಉದ್ದೇಶಕ್ಕಾಗಿ** ನಮೂನೆ 15-ಎ ಮತ್ತು ನಮೂನೆ 15-ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರ ಪತ್ರ ಸಂಖ್ಯೆ: ಎಲ್ಎನ್.ಡಿಸಿಆರ್:40/08-09 ದಿನಾಂಕ: 29-12-2010 ರಲ್ಲಿ ಪ್ರಸ್ತಾಪಿತ ಮೇಲ್ಕಂಡ 4.07ಎಕರೆ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (i) (V) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನನ್ನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಸಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ63, 79ಎ,79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38-ಬಿ ಮತ್ತು 38-ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63. 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ ಶ್ರೀ ಶೈಲಾ ಫಾರಂ ಪ್ರೈವೇಟ್ ಲಿಮಿಟೆಡ್, ಭೀಮಸಮುದ್ರ, ಚಿತ್ರದುರ್ಗ ಜಿಲ್ಲೆ, ಇವರು ಚಿತ್ರದುರ್ಗ ತಾಲ್ಲೂಕು, ಭೀಮಸಮುದ್ರ ಗ್ರಾಮದ ಸರ್ವೆ ನಂ.71/3ರಲ್ಲಿ 0.22 ಗುಂಟೆ, ಸರ್ವೆ ನಂ.48/1ರಲ್ಲಿ 2.29 ಎಕರೆ ಮತ್ತು ಸರ್ವೆ ನಂ.61/1ರಲ್ಲಿ 1.26 ಎಕರೆ ಹೀಗೆ ಒಟ್ಟು 4.07 ಎಕರೆ/ಗುಂಟೆ ಕೃಷಿ ಜಮೀನನ್ನು **ತೋಟಗಾರಿಕೆ ಉದ್ದೇಶಕ್ಕಾಗಿ** ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1) ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:-

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣಗೌಡ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**ಪಿ.ಆರ್: 840**

